# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ. ಯು. ಬಿ. ವೆಂಕಟೇಶ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 13

ಉತ್ತರಿಸಬೇಕಾದ ದಿನಾಂಕ : 14.09.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನ ಬಸವನಗುಡಿಯ ಶ್ರೀ ಗುರುರಾಘವೇಂದ್ರ ಬ್ಯಾಂಕ್ ನಿಯಮಿತದಲ್ಲಿ ಠೇವಣಿದಾರರಿಗೆ ವಂಚನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಬಂದಿದ್ದಲ್ಲಿ, ಠೇವಣಿದಾರರ ಹಿತರಕ್ಷಣೆ ಸಲುವಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಠೇವಣಿದಾರರ ಹಿತರಕ್ಷಣೆ ಸಂಬಂಧ ಈ ಕೆಳಕಂಡ ಕ್ರಮಗಳನ್ನು ಸರ್ಕಾರವು ಕೈಗೊಂಡಿರುತ್ತದೆ.<br>1. 2014-15 ರಿಂದ 2018-19 ರವರೆಗಿನ ಮರು ಲೆಕ್ಕಪರಿಶೋಧನೆಗೆ ದಿನಾಂಕ:09-07-2020 ರಂದು ಆದೇಶಿಸಲಾಗಿದೆ.<br>2. ದಿನಾಂಕ:27-02-2020 ರಂದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 64 ರ ವಿಚಾರಣೆಗೆ ಆದೇಶಿಸಲಾಗಿದೆ. ವಿಚಾರಣಾ ವರದಿ ನಿರೀಕ್ಷಿಸಲಾಗಿದೆ.<br>3. ಬ್ಯಾಂಕಿನಲ್ಲಿ ಹಣ ದುರುಪಯೋಗಕ್ಕೆ ಕಾರಣರಾದ ಸಿಬ್ಬಂದಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗಿದೆ. ಶಿಸ್ತು ಕ್ರಮದ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ.<br>4. ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಲಾಗಿದೆ.<br>5. ದಿನಾಂಕ:26-07-2021ರಂದು ನಿಬಂಧಕರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಬ್ಯಾಂಕಿನ ಪುನಃಶ್ಚೇತನಕ್ಕೆ ಕ್ರಮಕೈಗೊಳ್ಳಲು ಆಡಳಿತಾಧಿಕಾರಿಯವರಿಗೆ ಸೂಚನೆ ನೀಡಲಾಗಿದೆ. |
| ಇ | ವಂಚನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರ ಸಿ.ಐ.ಡಿ ತನಿಖೆಗೆ ಆದೇಶಿಸಿದ್ದು ಇಲ್ಲಿಯವರೆಗೆ ಆಗಿರುವ ಪ್ರಗತಿ ಏನು; ಯಾವ ಕಾಲಮಿತಿಯೊಳಗೆ ತನಿಖೆ ಪೂರ್ಣಗೊಳಿಸಲಾಗುವುದು ? | 1. ಈ ಪ್ರಕರಣದ ತನಿಖೆಯ ಪ್ರಗತಿಯ ಮೇಲ್ವಿಚಾರಣೆಯನ್ನು ಘನ ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ನೇತೃತ್ವದ ದ್ವಿಸದಸ್ಯ ಪೀಠವು ನಡೆಸುತ್ತಿದ್ದು, ಇಲ್ಲಿಯವರೆಗೆ 09 ತನಿಖಾ ಪ್ರಗತಿ ವರದಿಗಳನ್ನು ಸಲ್ಲಿಸಲಾಗಿರುತ್ತದೆ.<br><br>2. ಈ ಪ್ರಕರಣದಲ್ಲಿ ಮೇಲ್ನೋಟಕ್ಕೆ 923 ಕೋಟಿ ರೂಪಾಯಿಗಳ ಹಣಕಾಸಿನ ಅವ್ಯವಹಾರವಾಗಿರುವುದಾಗಿ ದೂರು ಸಲ್ಲಿಸಲಾಗಿರುತ್ತದೆ. ತನಿಖಾ ಕಾಲದಲ್ಲಿ ಆರೋಪಿಗಳಾದ ಕೆ. ರಾಮಕೃಷ್ಣ, ಜಿ. ರಘುನಾಥ್ ಮತ್ತು ವಿ.ಆರ್. ರಾಜೇಶ್ ರವರುಗಳಿಂದ ನಗದು ಹಣ ರೂ. 17,88,110/-ಗಳನ್ನು ಜಪ್ತಿಪಡಿಸಲಾಗಿರುತ್ತದೆ. ಮುಂದುವರೆದು ಆರೋಪಿಗಳು ಮತ್ತು ಅವರ ಅವಲಂಬಿತ ಸದಸ್ಯರ ಹೆಸರಿನಲ್ಲಿದ್ದ ಒಟ್ಟು 9,548 ವಿವಿಧ ಬ್ಯಾಂಕ್ ಖಾತೆಗಳಲ್ಲಿದ್ದ ರೂ. 15 ಕೋಟಿಗೂ ಅಧಿಕ ಹಣವನ್ನು ಫ್ರೀಜ್ ಮಾಡಲಾಗಿರುತ್ತದೆ. ತನಿಖೆಯಲ್ಲಿ |

ಆರೋಪಿತರು ಹಾಗೂ ಅವರ ಸಂಬಂಧಿಕರ ಹೆಸರಿನಲ್ಲಿದ್ದ ಸುಮಾರು 1,115 ಕೋಟಿ ರೂಪಾಯಿಗಿಂತ ಹೆಚ್ಚಿನ ಬೆಲೆಬಾಳುವ ಸ್ಥಿರಾಸ್ತಿಗಳನ್ನು ಗುರುತಿಸಿ ಪ್ರಿವೆನ್‌ಷನ್ ಆಫ್ ಮನಿ ಲಾಂಡ್ರಿಂಗ್ ಆಕ್ಟ್ 2002 ರ ಅಡಿಯಲ್ಲಿ ಕ್ರಮ ಜರುಗಿಸಲು ಜಾರಿ ನಿರ್ದೇಶನಾಲಯಕ್ಕೆ ವರದಿಯನ್ನು ಸಲ್ಲಿಸಲಾಗಿರುತ್ತದೆ.

3. ತನಿಖಾಧಿಕಾರಿಗಳು ತನಿಖಾ ಕಾಲದಲ್ಲಿ ಆರೋಪಿಗಳು ಮತ್ತು ಅವರ ಕುಟುಂಬದವರ ಹೆಸರಿನಲ್ಲಿದ್ದ ಸ್ಥಿರಾಸ್ತಿಗಳನ್ನು ಗುರುತಿಸಿ ಈ ಕುರಿತು ಕ್ರಮ ಜರುಗಿಸುವ ಬಗ್ಗೆ ವಿವರಗಳನ್ನು ಜಾರಿ ನಿರ್ದೇಶನಾಲಯಕ್ಕೆ ಸಲ್ಲಿಸಿದ್ದರ ಮೇರೆಗೆ ಜಾರಿ ನಿರ್ದೇಶನಾಲಯವು ದಿನಾಂಕ:17.09.2020 ರಂದು ಪಿ.ಎಂ.ಎಲ್.ಎ., ಕಾಯ್ದೆ ಅಡಿಯಲ್ಲಿ ಮುಟ್ಟುಗೋಲು ಆದೇಶ ಹೊರಡಿಸಿದ್ದು ಮುಂದಿನ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.

4. ಶ್ರೀ ಗುರು ರಾಘವೇಂದ್ರ ಸಹಕಾರ ಬ್ಯಾಂಕ್ ನಿಯಮಿತದ ಅಂಗ ಸಂಸ್ಥೆಯಾದ ಶ್ರೀ ಗುರು ಸಾರ್ವಭೌಮ ಸೌಹಾರ್ದ ಪತ್ತಿನ ಸಹಕಾರ ನಿಯಮಿತದಲ್ಲಿನ ಅವ್ಯವಹಾರದ ಬಗ್ಗೆ ಸರ್ಕಾರವು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ, ಬೆಂಗಳೂರು ರವರನ್ನು ಕರ್ನಾಟಕ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ಅಧಿನಿಯಮ 2004ರ ಅಡಿಯಲ್ಲಿ ಕ್ರಮ ಜರುಗಿಸಲು ಸಕ್ಷಮ ಪ್ರಾಧಿಕಾರವನ್ನಾಗಿ ನೇಮಕಗೊಳಿಸಿರುತ್ತದೆ. ಸಕ್ಷಮ ಅಧಿಕಾರಿಗಳಿಗೆ ತನಿಖೆಯನ್ನು ಗುರುತಿಸಿರುವ ಸ್ಥಿರ ಮತ್ತು ಚರಾಸ್ತಿಗಳ ವಿವರಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ವರದಿಯನ್ನು ಸಲ್ಲಿಸಿದ್ದು ಮುಟ್ಟುಗೋಲು ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.

5. ತನಿಖಾಧಿಕಾರಿಗಳು ಇದುವರೆವಿಗೂ ಈ ಪ್ರಕರಣದಲ್ಲಿ ಬಾಗಿಯಾಗಿರುವ ಒಟ್ಟು 37 ಜನ ಆರೋಪಿಗಳನ್ನು ದಸ್ತಗಿರಿ ಮಾಡಿರುತ್ತಾರೆ. 11 ಜನ ಆರೋಪಿಗಳು ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನನ್ನು ಪಡೆದುಕೊಂಡಿದ್ದು ಉಳದಂತೆ 04 ಆರೋಪಿಗಳು ಮರಣ ಹೊಂದಿರುತ್ತಾರೆ.

6. ಬ್ಯಾಂಕಿನಲ್ಲಿ ಏಪ್ರಿಲ್ 2009ನೇ ಸಾಲಿನಿಂದ ಜನವರಿ 2020ರ ಸಾಲಿನವರೆಗೆ ನಡೆದಿರುವ ಹಣಕಾಸಿನ ಅವ್ಯವಹಾರದ ಬಗ್ಗೆ ಮತ್ತು ಸುಳ್ಳು ಲಾಭ ನಷ್ಟದ ತ:ಖ್ತೆಯ ಕುರಿತು ಮೆ॥ ಕೆನ್ & ಕಂಪನಿ ರವರು ಫಾರೆನ್ಸಿಕ್ ಆಡಿಟ್ ನಡೆಸುತ್ತಿದ್ದು ಹಾಲಿ 2009-10ನೇ ಸಾಲಿನ ಹಣಕಾಸಿನ ಅವ್ಯವಹಾರದ ಬಗ್ಗೆ ಆಡಿಟ್ ವರದಿಯನ್ನು ಸಲ್ಲಿಸಿದ್ದರ ಮೇರೆಗೆ ದಿನಾಂಕ: 12.08.2021 ರಂದು ಮಾನ್ಯ ನ್ಯಾಯಾಲಯಕ್ಕೆ 2009-10ರ ಸಾಲಿನಲ್ಲಿ ನಡೆದಿರುವ ಹಣಕಾಸಿನ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಒಟ್ಟು 28 ಜನ ಆರೋಪಿಗಳ ವಿರುದ್ಧ ಪ್ರಾಥಮಿಕ ದೋಷಾರೋಪಣಾಪಟ್ಟಿಯನ್ನು ಸಲ್ಲಿಸಿದ್ದು, ನ್ಯಾಯಾಲಯದ ವಿಚಾರಣೆಯಲ್ಲಿರುತ್ತದೆ.

| | | |
|---|---|---|
| | | 7. ಶ್ರೀ ಗುರು ರಾಘವೇಂದ್ರ ಸಹಕಾರ ಬ್ಯಾಂಕ್ ನಿಯಮಿತದಲ್ಲಿ ಮತ್ತು ಶ್ರೀ ಗುರು ಸಾರ್ವಭೌಮ ಸೌಹಾರ್ದ ಪತ್ತಿನ ಸಹಕಾರ ನಿಯಮಿತದಲ್ಲಿ ನಡೆದಿರುವ ಹಣಕಾಸಿನ ಅವ್ಯವಹಾರದ ಬಗ್ಗೆ ಫಾರೆನ್ಸಿಕ್ ಆಡಿಟ್‌ನ್ನು ಲೆಕ್ಕಪರಿಶೋಧಕರು ಮಾಡುತ್ತಿದ್ದು, ಫಾರೆನ್ಸಿಕ್ ಆಡಿಟ್ ವರದಿ ಮುಗಿದ ಕೂಡಲೇ, ವಾರ್ಷಿಕವಾರು ದೋಷಾರೋಪಣಾ ಪಟ್ಟಿಗಳನ್ನು ಸಂಬಂಧಪಟ್ಟಂತಹ ನ್ಯಾಯಾಲಯಗಳಿಗೆ ಸಲ್ಲಿಸಿ ತನಿಖೆಯನ್ನು ಪೂರ್ಣಗೊಳಿಸಲಾಗುವುದು. |

**ಕಡತ ಸಂಖ್ಯೆ ಸಿಒ 76 ಸಿಆರ್‌ಸಿ 2021**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಯು.ಬಿ.ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 257(13) ಇದಕ್ಕೆ ಅನುಬಂಧ

ಶ್ರೀ ರಾಘವೇಂದ್ರ ಸಹಕಾರ ಬ್ಯಾಂಕ್, ಬೆಂಗಳೂರು ಇಲ್ಲಿ ಸೇವೆಯಿಂದ ವಜಾಗೊಂಡ ಸಿಬ್ಬಂದಿಗಳ ವಿವರ

| ಕ್ರ ಸಂ. | ಸಿಬ್ಬಂದಿಯ ಹೆಸರು | ಹುದ್ದೆ | ವಜಾಗೊಳಿಸಿದ ದಿನಾಂಕ |
|---|---|---|---|
| 1 | ಶ್ರೀ ಸಂತೋಷ್ ಕುಮಾರ್ ಎ | ಮುಖ್ಯಕಾರ್ಯನಿರ್ವಹಣಾಧಿಕಾರಿ | 16-08-2021 |
| 2 | ಶ್ರೀ ಮುರಳಿಧರ ಅರಿಕಡಿ | ವ್ಯವಸ್ಥಾಪಕರು | 12-03-2021 |
| 3 | ಶ್ರೀ ಪ್ರಶಾಂತ್ ಹೆಚ್. ಆರ್. | ಸಹಾಯಕ ವ್ಯವಸ್ಥಾಪಕರು | 30-08-2021 |
| 4 | ಶ್ರೀ ರಾಕೇಶ್ ಡಿ | ಹಿರಿಯ ಸಹಾಯಕರು | 30-08-2021 |
| 5 | ಶ್ರೀ ಶ್ರೀರಂಗ ಕುಲಕರ್ಣಿ | ಹಿರಿಯ ಸಹಾಯಕರು | 31-08-2021 |
| 6 | ಶ್ರೀ ಪವನ್ ಪಿ | ಹಿರಿಯ ಸಹಾಯಕರು | 25-08-2021 |
| 7 | ಶ್ರೀ ಗುರುರಾಜ ಪಿ | ಕಿರಿಯ ಸಹಾಯಕರು | 23-08-2021 |
| 8 | ಶ್ರೀ ಪ್ರಿಯಾ ಕಲ್ಲವಿ ಕೆ | ಕಿರಿಯ ಸಹಾಯಕರು | 26-08-2021 |
| 9 | ಶ್ರೀ ಗಣಪತಿ ಎಲ್ ಹೆಗಡೆ | ಕಿರಿಯ ಸಹಾಯಕರು | 31-08-2021 |
| 10 | ಶ್ರೀ ರವಿಕುಮಾರ್ ಐತಾಳ್ ಪಿ ಎಸ್ | ಕಿರಿಯ ಸಹಾಯಕರು | 06-09-2021 |
| 11 | ಶ್ರೀ ಯೋಗೀಶ್ ಚಾತ್ರ | ಸಹಾಯಕರು | 19-08-2021 |
| 12 | ಶ್ರೀ ಆದಿತ್ಯ ಶಾಸ್ತ್ರಿ | ಸಹಾಯಕರು | 24-08-2021 |
| 13 | ಶ್ರೀ ಪವನ್ ಕುಮಾರ್ ಪಾಟೀಲ್ | ಸಹಾಯಕರು | 24-08-2021 |
| 14 | ಶ್ರೀ ರವಿ ಪ್ರಕಾಶ್ ಕೆ | ಸಹಾಯಕರು | 25-08-2021 |
| 15 | ಶ್ರೀ ಮುರಳೀಧರ್ ಎಸ್. ಭಟ್ | ಚಾಲಕರು | 24-08-2021 |

ಅಮಾನತ್ತುಗೊಂಡವರ ವಿವರ

| ಕ್ರ ಸಂ. | ಸಿಬ್ಬಂದಿಯ ಹೆಸರು | ಹುದ್ದೆ | ಅಮಾನತ್ತುಗೊಳಿಸಿದ ದಿನಾಂಕ |
|---|---|---|---|
| 1 | ಶ್ರೀ ಸುಬ್ರಮಣ್ಯ ಟಿ. ಎಸ್. | ಹಿರಿಯ ಸಹಾಯಕರು | 06-02-2021 |
| 2 | ಶ್ರೀ ಶ್ರೀಪ್ರಸಾದ್ ಹೆಗ್ಗಡೆ | ಕಿರಿಯ ಸಹಾಯಕರು | 16-01-2021 |
| 3 | ಶ್ರೀ ಕಾರ್ತಿಕ್ ಜಿ. ಎನ್. | ಕಿರಿಯ ಸಹಾಯಕರು | 01-06-2021 |
| 4 | ಶ್ರೀ ರಾಜೀವ ಎ. ಜಿ. | ಕಿರಿಯ ಸಹಾಯಕರು | 01-06-2021 |

ಸಹಕಾರ ಸಂಘಗಳ ಜಂಟಿ ನಿಬಂಧಕರು
(ಪಟ್ಟಣ ಬ್ಯಾಂಕುಗಳ ವಿಭಾಗ)